ಡಾ॥ ಕೆ. ಜಿ. ವಸಂತಮಾಧವ

# ಕೊಡೆತೂರು ಮಜಿಲಾರ ಬಾಳಿಕೆ ಶಿಲಾಶಾಸನ

ಪೀಠಿಕೆ : ತುಳುನಾಡಿನ ಅರಸುಮನೆತನಗಳಲ್ಲಿ ಸಾವಂತ(ಸಾಮಂತ)ರಸರು ಇಲ್ಲಿಯ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಇವರು ಧರ್ಮ ಸಮನ್ವಯ ಕಾಪಾಡಿಕೊಂಡು ಬಂದು ಕಲೆ, ಸಾಹಿತ್ಯಗಳನ್ನು ತಮ್ಮ ಆಳ್ವಿಕೆಯಲ್ಲಿ ಪ್ರೋತ್ಸಾಹಿಸಿದರು. ಇವರು ೧೪ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಶಾಂಭವಿ ನದಿಯಿಂದ, ನಂದಿನಿ ನದಿ(ಮೂಲ್ಕಿ ಮತ್ತು ಪಾವಂಜೆ)ಯವರೆಗಿನ ಪ್ರದೇಶವನ್ನು ಆಳಿಕೊಂಡಿದ್ದರು. ಈ ಅರಸು ಮನೆತನದವರು ವಿಜಯನಗರ ಮತ್ತು ಕೆಳದಿ ನಾಯಕರ ಸಾರ್ವಭೌಮತೆಯನ್ನು ಒಪ್ಪಿಕೊಂಡು ತಮ್ಮ ಸೀಮೆಯನ್ನು ಆಳಿಕೊಂಡಿದ್ದರು. ಇವರ ರಾಜಧಾನಿ ಮೊದಲು ಸೀಮಂತೂರು, ನಂತರ ಮೂಲಿಕೆಯ ಕೋಟೆ ಕೇರಿ ಮತ್ತು ಕೊನೆಗೆ ಪಡುಪಣಂಬೂರು ಆಗಿದ್ದವು. ಇವರ ಆಳ್ವಿಕೆ ಪ್ರದೇಶ ಒಂಭತ್ತು ಮಾಗಣೆಗಳನ್ನು ಒಳಗೊಂಡಿತ್ತು. ಈ ಒಂಭತ್ತು ಮಾಗಣೆಗಳಲ್ಲಿ ಕೊಡೆತ್ತೂರು ಒಂದಾಗಿತ್ತು. ಇಲ್ಲಿಯೆ ಈ ಮೇಲೆ ಕಾಣಿಸಿದ ಶಾಸನವು ಇದೆ. ಈ ಶಾಸನ ಇರುವ ಪ್ರದೇಶ 'ಮಂಜಿಲಾರ ಬಾಳಿಕೆ' ಎನ್ನುತ್ತಾರೆ. ಈ ಶಾಸನ ಇರುವುದನ್ನು ಪಿ. ಶ್ರೀನಿವಾಸಭಟ್ಟರು ತಿಳಿಸಿದರು.

### ಶಾಸನದ ಪಾಠ

೧ ಶ್ರೀ ಕಾಂತೇಶ್ವರಾಯನಮಃ ಸ್ವಸ್ತಿಶ್ರೀ ಜಯಾ
೨ ಭ್ಯುದಯ ಶಾಲಿವಾಹನ ಶಕವರುಷ
೩ ೧೫೩೨ನೆಯ ಸಉಮ್ಯ ಸಂವತ್ಸರದ ಮಾಘ
೪ ಶುಧ ೧ರಲು ಶ್ರೀಮಂತು ಕಾಂತೇಶ್ವರದೇವರ
೫ ಸಂಕೇತ ಕೊಡೆತೂರ . . ದಲ್ಲಿ ಚೆಂನಮಾದೇವಿಯ
೬ ಕಿಂನಿಕ ಸಾವಂತರು ಹಾಕಿಸ್ದ ಶಿಲಾಶಾಸನದ
೭ ಕ್ರಮವೆಂತೆಂದರೆ ದೇವಸ್ಥದ ಒಕಲಿಂದ ನಂಮ ಮನು
೮ ಶ್ಯರು ಯೆತ್ತುವ ಮೂವತ್ತೆರಡು ವರಹಂನು ಆ ಒ
೯ ಕಲರ ಚೌಟ ಉಪಾರನ ಮನುಶ್ಯರು ಯೆತ್ತ
೧೦ ಲಿಲ ಆ ಒಕಲ ತಾವೆ ನಂಮ ಮನುಶ್ಯರು

೧೧ ಪೂರ್ವ ಪ್ರಮಾಣದಲಿ ಯೆತ್ತಾಣ ಒತ್ತಾಯ
೧೨ ಮಾಡದಂತೆ ಕಟ್ಟು ಮಾಡಿಸ್ತೇವು ಕಾಂತೇಶ್ವರದ
೧೩ ಮನುಶ್ಶರು ಪೊಕಲಿಂ ದುಗ್ಗ ಮಡೆತ ಭೋಗವ ಪೂರ್ವ
೧೪ ವರ್ತಕದಲ್ಲಿ ತಗೆವೂಯಿದಕ್ಕೆ ನಾಲು ತಪ್ಪಿದರೆ
೧೫ ಜನಾರ್ದನದೇವರಿಗೂ ವರ್ದಮಾನಸ್ವಾಮಿಗೂ ತಪ್ಪಿ
೧೬ ದವರು ಕಾಂತೇಶ್ವರದೇವರ ಮನುಶ್ಶರು ತಪ್ಪಿದರೆ ಕಾಂತೇಶ್ವ
೧೭ ರಗೆ ತಪ್ಪಿದವರು ॥ ಭದ್ರಭೂಯಾತ್ ಶ್ರೀ*

**ಶಾಸನದ ಸಾರಾಂಶ :** ಕನ್ನಡಲಿಪಿ ಮತ್ತು ಅದೇ ಭಾಷೆಯಲ್ಲಿ ಈ ಶಾಸನ ಇದೆ. ಶಾಸನವು ೧೭ ಪಂಕ್ತಿಗಳ ನ್ನೊಳಗೊಂಡಿದೆ. 'ಕಾಂತೇಶ್ವರಾಯ ನಮಃ' ಎಂದು ಇದು ಆರಂಭವಾಗುತ್ತದೆ. ಇಲ್ಲಿ ತಿಳಿಸಿದ ಕಾಂತೇಶ್ವರ ಕಾರ್ಕಳ ತಾಲೋಕಿನ ಕಾಂತಾವರದ ಶಿವಾಲಯವಾಗಿದೆ. ಈ ಶಾಸನವು 'ಚೆಂನಮದೇವಿಯ ಕಿಂನಿಕ ಸಾವಂತರು' ಎಂದು ತಿಳಿಸಿ ಇವರುಗಳು ಹಾಕಿದ ಶಾಸನದ ವಿವರ ಗಳನ್ನು ತಿಳಿಸುತ್ತದೆ. ಈ ವಿವರಗಳು ಏನೆಂದರೆ, ಇವರು ಕೊಡೆತೂರದಲ್ಲಿ ಕಾಂತೇಶ್ವರದೇವರ ಒಕ್ಕಲಿಗೆ ಈ ದೇವಾಲಯಕ್ಕೆ ಕೊಡುವ ಹಣವನ್ನು(ಗೇಣಿ) ೩೨ ವರಹವನ್ನು ನಿರ್ಣಯಿಸಿ, ಇದಕ್ಕಿಂತ ಹೆಚ್ಚಿಗೆ ಹಣವನ್ನು ಚಾವುಟರು ದೇವಾಲಯದ ಪರವಾಗಿ ಎತ್ತಬಾರದು. (ಇಲ್ಲಿ ತಿಳಿಸಿದ ಚಾವುಟರು ತುಳುನಾಡಿನ ಇನ್ನೊಂದು ಅರಸು ಮನೆತನ. ಇವರ ರಾಜಧಾನಿ ಪುತ್ತಿಗೆಯಾಗಿತ್ತು. ಇವರ ಸೀಮೆಯಲ್ಲಿ ಕಾಂತೇಶ್ವರ ದೇವಾಲಯವಿದೆ.) ಈ ನಿರ್ದಿಷ್ಟ ಮೊತ್ತದ ಗೇಣಿಕ್ಕಿಂತ ಹೆಚ್ಚಿಗೆ ನಾವು ಎತ್ತಲು ಬಿಡಬಾರದು. ಇದನ್ನು ಉಲ್ಲಂಘಿಸಿದರೆ ಜನಾರ್ಧನ, ವರ್ಧಮಾನ ಮತ್ತು ಕಾಂತೇಶ್ವರ ದೇವರಿಗೆ ತಪ್ಪಿದವರು. ಇಷ್ಟನ್ನು ತಿಳಿಸಿ ಶಾಸನವು ಅಂತ್ಯವಾಗುತ್ತದೆ.

**ಶಾಸನದ ಪ್ರಾಮುಖ್ಯತೆ :** ಈ ಮಂಜಿಲಾರ ಬಾಳಿಕೆಯ ಶಾಸನವು ಮೂಲಿಕೆಸೀಮೆಯ ಇತಿಹಾಸ ಅಧ್ಯಯನಕ್ಕೆ ಹೊಸ ಸಂಗತಿಗಳನ್ನು ತಿಳಿಸಿದೆ. ಇಷ್ಟರ ವರೆಗೆ ಸ್ಪಷ್ಟವಾಗಿ ತಿಳಿಸದ ಚೆಂನಮದೇವಿ ಮತ್ತು ಕಿನಿಕ ಸಾವಂತರ ಜಂಟಿ ಆಳ್ವಿಕೆಯನ್ನು ಈ ಶಾಸನವು ತಿಳಿಸಿದೆ. ಇವಳು ಈ ಹಿಂದೆ ಆಳಿದ್ದ ದುಗ್ಗಣ ಸಾವಂತನ ಸಹೋದರಿ. ಇವಳನ್ನೆ ಪದ್ಮನಾಭಕವಿಯು ದೇವಮರಾಜಿ[1] ಎಂದು ತನ್ನ ಕಾವ್ಯದಲ್ಲಿ ತಿಳಿಸಿದ್ದಾನೆ. ಇವಳನ್ನು ಪಶ್ಚಿಮ ವೇಣುಪುರದ (ಪಡುಬಿದ್ರೆ) ಬಲ್ಲಾಳ ಮಹಾಲಿಂಗನು ಮದುವೆಯಾಗಿದ್ದನು.[2] ಶಾಸನದಲ್ಲಿ ತಿಳಿಸಿದ ಕಿಂನಿಕನು ಅಪ್ರಬುದ್ದನಾಗಿದ್ದುದರಿಂದ ಈ ರಾಣಿ ಮಗನ ಹೆಸರಿನಲ್ಲಿ ನಡೆಸಿಕೊಂಡು ಬಂದಳೆಂದು ತಿಳಿದು ಬರುತ್ತದೆ. ಇದನ್ನೇ ಇಟೇಲಿಯ ಪ್ರವಾಸಿ ಡೆಲ್ಲಾವೆಲ್ಲಿ ಮತ್ತು ಪದ್ಮನಾಭಕವಿಯ ಬರಹಗಳು ಸಮರ್ಥಿಸು ತ್ತವೆ.[3] ಈ ರಾಣಿಯನ್ನೇ ಡೆಲ್ಲಾವೆಲ್ಲಿಯು 'ಕಾರ್ನಾಟ ರಾಣಿ' ಎಂದು ಕರೆದಿದ್ದಾನೆ.[4] ಕೊಡತೂರದಲ್ಲಿಯ ಕಾಂತೇಶ್ವರದೇವರ ಒಕ್ಕಲಿಗೆ ಕೊಡುವ ಗೇಣಿ ನಿರ್ಧರಿ ಸಿದ್ದು ಈ ಶಾಸನದ ಇನ್ನೊಂದು ಹೊಸಸಂಗತಿ. ಇದ ರಿಂದ ಈ ಒಕ್ಕಲಿಗೆ ಈ ಪ್ರದೇಶದಲ್ಲಿ ಕೃಷಿಜೀವನದಲ್ಲಿ

---

* ಶಾಸನದ ಪಾಠ ನೋಡಿ : ಕೆ. ಜಿ. ವಸಂತಮಾಧವ : ಮೂಲಿಕೆಯ ಇತಿಹಾಸ, ಪು. ೭೬-೭೭

1 ಗಣಪತಿ ರಾವು ಎಂ. ಐಗಳ : ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಮಂಗಳೂರು, ೧೯೨೩, ಪು. ೩೪೨

2 ಪುಟ್ಟುಸ್ವಾಮಿ (ಸಂ.) : ಪದ್ಮಾವತಿ ಮಹಾತ್ಮ್ಯ ಅಥವಾ ಜಿನದತ್ತರಾಯ ಚರಿತ್ರೆ, ಮಂಗಳೂರು, ೧೯೫೦, ಪು. ೫

3 *The Travels in India*, Vol. II, London, 1892, pp. 352-3 ; ಪದ್ಮನಾಭಕವಿ, ಪು. ೫ : ಪದ್ಯ ೬೧

4 *The Travels in India*, Vol. II, p. 352 ; ವಿವರಗಳಿಗೆ, B.A. Saletore 'Carnate', *Journal of the Bombay Historical Society*, Vol. II, 1929, pp. 223-231 ; ಕೆ. ಜಿ. ವಸಂತಮಾಧವ : 'ಕಾರ್ನಾಟನ ರಾಣಿ', ವಿಜಯ, ೧೯೭೨, ಪು. ೪೭-೫೩

ಭದ್ರತೆಯನ್ನು ಉಂಟುಮಾಡಲು ಸಹಾಯಕವಾಯಿತು. ಗೇಣಿಯನ್ನು ಹಣದ ಮುಖಾಂತರವೂ ಕೊಡುವ ಪದ್ಧತಿ ಇದೆಯೆಂದು ಈ ಶಾಸನದಿಂದ ತಿಳಿದುಬರುತ್ತದೆ. ಚೌಟ ಅರಸರ ಅಧಿಕಾರಿಗಳು ಕಾಂತೇಶ್ವರದೇವರ ಒಕ್ಕಲಿಂದ ಗೇಣಿ ವಸೂಲಿ ಮಾಡುತ್ತಿದ್ದರೆಂದು ಈ ಶಾಸನದಿಂದ ತಿಳಿಯುತ್ತದೆ. ಇದರಿಂದಾಗಿ ಅರಸುಗಳಿಗೆ ದೇವಾಲಯದ ಮೇಲೆ ಹಿಡಿತ ಇದ್ದಿತೆಂದು ತಿಳಿದುಬರುತ್ತದೆ. ಒಟ್ಟಿನಲ್ಲಿ ಈ ಮಜಿಲಾರ ಬಾಳಿಕೆ ಶಿಲಾಶಾಸನವು ದೇವಸ್ಥಾನದ ಒಕ್ಕಲಿಗೆ ಗೇಣಿ ಏರಿಸಿದ ಹಾಗೇ ರಕ್ಷಣೆಯನ್ನೂ ನೀಡುತ್ತದೆ. ಇದು ಈ ಶಾಸನದ ಇನ್ನೊಂದು ವೈಶಿಷ್ಟ್ಯ. ಇದನ್ನು ಉಲ್ಲಂಘಿಸಿದವರು ಈ ಪ್ರದೇಶದ ಮುಖ್ಯ ದೇವರುಗಳಾದ ಜನಾರ್ಧನ, ಕಾಂತೇಶ್ವರ ಮತ್ತು ವರ್ಧಮಾನರಿಗೆ ತಪ್ಪಿದವರು ಎಂದು ಈ ಶಾಸನ ಎಚ್ಚರಿಸಿದೆ.

ಇಲ್ಲಿ ತಿಳಿಸಿದ ಜನಾರ್ಧನದೇವರು ಮೂಲಿಕೆ ಸೀಮೆಯ ದೇವಾಲಯವಾದ ಸೀಮಂತೂರು ಜನಾರ್ಧನ. ಈ ದೇವಾಲಯದಲ್ಲೇ ಸಾವಂತರಸರಿಗೆ ಪಟ್ಟವಾಗುವುದು. ಈ ದೇವರ ಸಮ್ಮುಖದಲ್ಲಿ ಸಾವಂತ ಅರಸರುಗಳು ಒಪ್ಪಂದಗಳನ್ನು ಮಾಡಿಕೊಂಡಿದ್ದರು.[5] ವರ್ಧಮಾನ, ಇದು ಕಾರ್ನಾಡಿನಲ್ಲಿರುವ (ಈಗ ಪಡುಪಣಂಬೂರು) ವರ್ಧಮಾನ ಬಸದಿ. ಈ ಬಸದಿಯನ್ನು ದುಗ್ಗಣ ಸಾವಂತನು ಕಟ್ಟಿದನು. ಈ ಶಾಸನದಲ್ಲಿರುವ ಜನಾರ್ಧನ, ವರ್ಧಮಾನ ಮತ್ತು ಕಾಂತೇಶ್ವರಗಳ ಉಲ್ಲೇಖವು, ಇಲ್ಲಿ ವೈಷ್ಣವ, ಜೈನ ಮತ್ತು ಶೈವ ಸಂಪ್ರದಾಯಗಳ ಸಮನ್ವಯತೆಯನ್ನು ವ್ಯಕ್ತಪಡಿಸುತ್ತದೆ. ಈ ಶಾಸನವು ತುಳುನಾಡಿನ ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ವಿಚಾರಗಳ ಮೇಲೆ ಹೆಚ್ಚಿನ ಬೆಳಕು ಚೆಲ್ಲುತ್ತದಾದ್ದರಿಂದಾಗಿ ಇದು ಅಧ್ಯಯನಕ್ಕೆ ಯೋಗ್ಯವಾಗಿದೆ.*

5 *Annual Report on South Indian Epigraphy,* 1931, Nos. 339, 340 ; ನೋಡಿ : ಕೆ. ಜಿ. ವಸಂತಮಾಧವ : ಮೂಲಿಕೆಯ ಇತಿಹಾಸ, ಮೂಲ್ಕಿ, ೧೯೮೫, ಪು. ೧೯, ೨೦, ೨೯

* ಈ ಶಾಸನ ಅಧ್ಯಯನಿಸುವಲ್ಲಿ ಸಹಕಾರವಿತ್ತ ಶ್ರೀ ಪಿ. ಶ್ರೀನಿವಾಸಭಟ್ಟ ಮತ್ತು ಶ್ರೀ ಎಸ್. ಮೋಹನರಾವ್-ಇವರುಗಳಿಗೆ ನಾನು ಕೃತಜ್ಞನಾಗಿದ್ದೇನೆ.